# ಇಸ್ಲಾಮೀ ಸಂಸ್ಕೃತಿ


*ಲೇಖಕರು*

**ಮುನ್ಶಿ ಪ್ರೇಮ್‌ಚಂದ್**

*ಅನುವಾದ*

**ಮುಹಮ್ಮದ್ ಅಶ್ರಫ್**

ಪರಮದಯಾಮಯನೂ ಕರುಣಾಳುವೂ ಆದ
ಅಲ್ಲಾಹನ ನಾಮದಿಂದ

# ಇಸ್ಲಾಮೀ ಸಂಸ್ಕೃತಿ

*[ಖ್ಯಾತ ಕಾದಂಬರಿಕಾರರೂ ಕಥೆಗಾರರೂ ಆಗಿದ್ದ ಮುನ್ಷಿ ಪ್ರೇಮ್‌ಚಂದ್‌ರವರ ಪ್ರಬಂಧದ ಸಂಕ್ಷಿಪ್ತ ರೂಪ ಇದೀಗ ನಿಮ್ಮ ಹಸ್ತದಲ್ಲಿದೆ. ಇದನ್ನು 'ಪ್ರತಾಪ್' ವಾರ ಪತ್ರಿಕೆಯ ಡಿಸೆಂಬರ್ 1925ರ ಸಂಚಿಕೆಯಿಂದ ಆಯ್ದುಕೊಳ್ಳಲಾಗಿದೆ. -ಪ್ರಕಾಶಕರು]*

ಹಿಂದೂಗಳು ಮತ್ತು ಮುಸ್ಲಿಮರು ಒಂದು ಸಾವಿರ ವರ್ಷಗಳಿಂದಲೂ ಭಾರತದಲ್ಲಿ ಸಹಜೀವನ ನಡೆಸುತ್ತಾ ಬಂದಿದ್ದಾರೆ. ಆದರೆ ಇದುವರೆಗೂ ಪರಸ್ಪರರನ್ನು ಅರಿತುಕೊಂಡಿಲ್ಲ. ಹಿಂದುವಿನ ಪಾಲಿಗೆ ಮುಸ್ಲಿಮನು ಒಂದು ರಹಸ್ಯವಾಗಿದ್ದಾನೆ. ಹಾಗೆಯೇ ಮುಸ್ಲಿಮನಿಗೆ ಹಿಂದುವೂ ಒಗಟಾಗಿದ್ದಾನೆ. ಇಸ್ಲಾಮಿನ ವಾಸ್ತವಾಂಶಗಳ ಬಗ್ಗೆ ತಿಳಿದು ಕೊಳ್ಳುವಷ್ಟು ಬಿಡುವು ಹಿಂದುವಿಗಿಲ್ಲ. ಅದೇ ರೀತಿ, ಹಿಂದೂ ಧರ್ಮದ ವಾಸ್ತವಾಂಶಗಳ ಸಮುದ್ರದಲ್ಲಿ ಮುಳುಗೇಳುವಷ್ಟು ಅವಕಾಶ ಮುಸ್ಲಿಮನಿಗಿಲ್ಲ. ಈರ್ವರೂ ಪರಸ್ಪರರ ಕುರಿತು ತಲೆಬುಡವಿಲ್ಲದ ವಿಷಯಗಳನ್ನು ಕಲ್ಪಿಸುವುದರಲ್ಲೇ ತಲ್ಲೀನರಾಗಿದ್ದಾರೆ.

ಜಗತ್ತಿನಾದ್ಯಂತದ ಕೆಡುಕುಗಳೆಲ್ಲಾ ಮುಸ್ಲಿಮರಲ್ಲಿದೆ, ಅವರಲ್ಲಿ ಕರುಣೆಯಿಲ್ಲ, ಧರ್ಮವಿಲ್ಲ, ಸಚ್ಚಾರಿತ್ರ್ಯವಿಲ್ಲ, ಸಹನೆ-ಸಂಯಮವಿಲ್ಲವೆಂದು ಹಿಂದೂವೊಬ್ಬನು ಭಾವಿಸುತ್ತಾನೆ. ಅದೇ ರೀತಿ, ಹಿಂದೂಗಳು ಕಲ್ಲನ್ನು ಪೂಜಿಸುವವರು, ಕೊರಳಲ್ಲಿ ನೂಲು ಧರಿಸುವವರು, ಹಣೆಗೆ ಬಣ್ಣ ಹಚ್ಚುವವರು ಮತ್ತು ಸೊಪ್ಪು ತರಕಾರಿಗಳನ್ನು ತಿನ್ನುವಂತಹ ಜೀವಿಗಳೆಂಬ ಕಲ್ಪನೆಯನ್ನು ಮುಸ್ಲಿಮನು ಹೊಂದಿದ್ದಾನೆ. ಈರ್ವರೂ

ಪರಸ್ಪರರ ನೆರಳಿನಿಂದಲೂ ದೂರವಿರುತ್ತಾರೆ. ಹಾಗೆಯೇ, ಈ ಎರಡೂ ವಿಭಾಗದ ಧಾರ್ಮಿಕ ನೇತಾರರು ಈ ಭೇದಭಾವದಲ್ಲಿ ಎಲ್ಲರಿಗಿಂತ ಮುಂದಿದ್ದಾರೆ. ಬಹುಶಃ ವೈರ ಮತ್ತು ವಿರೋಧವನ್ನು ಧರ್ಮದ ವಿಶೇಷ ಚಿಹ್ನೆಯೆಂದು ಅವರು ಭಾವಿಸಿದಂತಿದೆ.

ನಾನು ಈಗ ಹಿಂದೂ-ಮುಸ್ಲಿಮ್ ವೈರತ್ವದ ಬಗ್ಗೆ ಏನನ್ನೂ ಹೇಳ ಬಯಸುವುದಿಲ್ಲ. ಮೌಲಾನಾ ಶೌಕತ್ ಅಲಿಯವರಲ್ಲಿದ್ದಂತಹ ವಿಶ್ವಾಸ ನನ್ನಲ್ಲೂ ಇದೆ. ಅದೇನೆಂದರೆ, ಈ ವೈರತ್ವವು ಕೇವಲ ತಾತ್ಕಾಲಿಕ ಮಾತ್ರವಾಗಿದೆ. ಹಿಂದೂ-ಮುಸ್ಲಿಮರು ತಂತಮ್ಮ ಪ್ರಮಾದಗಳಿಗೆ ಪಶ್ಚಾತ್ತಾಪಪಟ್ಟುಕೊಳ್ಳುವಂತಹ ದಿನ ದೂರವಿಲ್ಲ. ಒಂದು ವೇಳೆ, ಮಾನವೀಯತೆ ಮತ್ತು ಸೌಜನ್ಯಕ್ಕೆ ಕಟ್ಟು ಬಿದ್ದಲ್ಲದಿದ್ದರೂ ಕನಿಷ್ಠ ಸ್ವರಕ್ಷಣೆಗಾಗಿಯಾದರೂ ಒಗ್ಗಟ್ಟಾಗುವುದು ಅಗತ್ಯವೆಂದು ಕಂಡುಕೊಳ್ಳುವರು.

ನಾವು ಈಗ, ಹಿಂದೂಗಳಲ್ಲಿ ಮುಸ್ಲಿಮರ ಸಂಸ್ಕೃತಿಯ ಬಗೆಗಿರುವ ದೃಷ್ಟಿಕೋನವು ಎಷ್ಟರ ಮಟ್ಟಿಗೆ ನ್ಯಾಯಸಮ್ಮತವೆಂಬುದನ್ನು ನೋಡೋಣ.

## ಸಂಸ್ಕೃತಿಯ ಮೂರು ವಿಧಗಳು

ಹಿಂದಿನ ಕಾಲದಲ್ಲಿ ಒಂದು ಜನಾಂಗದ ಧಾರ್ಮಿಕತೆ ಮತ್ತು ಸಚ್ಚಾರಿತ್ರ್ಯಗಳನ್ನು ಅದರ ಸಂಸ್ಕೃತಿಯ ಕುರುಹಾಗಿ ಪರಿಗಣಿಸಲಾಗುತ್ತಿತ್ತು. ಸೇವೆ ಮತ್ತು ಬಲಿದಾನವೇ ಸಂಸ್ಕೃತಿಯ ಪ್ರಮುಖ ಅಂಶವಾಗಿತ್ತು. ಚೀನಾ, ಜಪಾನ್, ಭಾರತ, ಈಜಿಪ್ಟ್ ಹಾಗೂ ಇತರ ಯಾವುದೇ ದೇಶದ ಪ್ರಾಚೀನ ನಾಗರಿಕತೆಯನ್ನು ಅವಲೋಕಿಸಿ ನೋಡಿ. ನೀವು ಅದನ್ನು ಧಾರ್ಮಿಕವಾಗಿರುವುದನ್ನು ಕಾಣುವಿರಿ. ಈಗಲೂ ಅದೇ ಮಾದರಿಗೆ ಆದ್ಯತೆಯಿದೆಯಾದರೂ ಪರಿಸ್ಥಿತಿಯು ಅದರಲ್ಲಿ ಕೊಂಚ ಮಟ್ಟಿನ ಬದಲಾವಣೆಯನ್ನು ಮಾಡಿದೆ. ಅಂದರೆ ಅದರ ರೂಪದಲ್ಲಿ ಬದಲಾವಣೆ ಮಾಡಲಾಗಿದೆಯೆನ್ನಬಹುದು.

ಫ್ರೆಂಚ್ ಕ್ರಾಂತಿಯು ಪ್ರಸ್ತುತಪಡಿಸಿದಂತಹ ಸಂಸ್ಕೃತಿ ಮತ್ತು ನಾಗರಿಕತೆಯು ನ್ಯಾಯ, ಸಹೋದರತೆ ಮತ್ತು ಸಮಾನತೆಯೆಂಬ ಮೂರು ಬುನಾದಿಗಳ ಮೇಲೆ ನಿಂತಿತ್ತು. ಕೊಂಚ ಆಲೋಚಿಸಿ ನೋಡಿದರೆ ಪ್ರಾಚೀನ ಮಾದರಿ ಮತ್ತು ಆಧುನಿಕ ಮಾದರಿಯ ನಡುವೆ ವಿಶೇಷ ವ್ಯತ್ಯಾಸವೇನೂ ಕಾಣದು. ಆದರೆ ನಾವಿಲ್ಲಿ ಆಧುನಿಕ

ಸಂಸ್ಕೃತಿಯ ಅವಲೋಕನ ನಡೆಸುತ್ತಿದ್ದೇವೆ. ಅದಕ್ಕಾಗಿ ನವೀನ ಮಾನದಂಡವನ್ನು ಉಪಯೋಗಿಸುವುದು ಸೂಕ್ತವೆನಿಸುತ್ತದೆ.

## ನ್ಯಾಯ

ಮೊತ್ತ ಮೊದಲು ನ್ಯಾಯವನ್ನೇ ತೆಗೆದುಕೊಳ್ಳಿ. ನಮಗೆ ತಿಳಿದ ಮಟ್ಟಿಗೆ ನ್ಯಾಯ ಪಾಲನೆಗೆ ಇಸ್ಲಾಮ್ ನೀಡಿದಷ್ಟು ಪ್ರಾಧಾನ್ಯತೆಯನ್ನು ಬೇರಾವುದೇ ಧರ್ಮ ನೀಡಿಲ್ಲ.

ಕ್ರೈಸ್ತ ಧರ್ಮದಲ್ಲಿ ದಯೆಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗಿದೆ. ದಯೆಯಲ್ಲಿ ಹಿರಿಯ-ಕಿರಿಯ, ಉಚ್ಚ-ನೀಚ, ಸಬಲ-ದುರ್ಬಲರೆಂಬ ಪರಿಕಲ್ಪನೆಯಿರುತ್ತದೆ. ಆದರೆ ಸುಸ್ಪಷ್ಟ ನ್ಯಾಯವಿರುವೆಡೆ ಈ ಭಿನ್ನತೆಗೆ ಅವಕಾಶವಿರಲಾರದು. ಅಲ್ಲಿ ದಯೆ ಅರ್ಥಹೀನ. ಕನಿಷ್ಠ ಮಾನವರ ಪಾಲಿಗಂತೂ ಇಲ್ಲ. ಅದು ಇತರ ಜೀವಿಗಳಿಗಷ್ಟೇ ಅನ್ವಯವಾಗುಳಿಯುತ್ತದೆ.

ಹಿಂದೂ ಧರ್ಮವು ಅಹಿಂಸೆಯನ್ನು ಪ್ರತಿಪಾದಿಸುತ್ತದೆ. ಒಂದರ್ಥದಲ್ಲಿ ನ್ಯಾಯ ಮತ್ತು ಅಹಿಂಸೆಯು ಒಂದೇ ನಾಣ್ಯದ ಎರಡು ಮುಖಗಳು. ಅಹಿಂಸೆಯ ಹೊರತು ನ್ಯಾಯ ಅಥವಾ ನ್ಯಾಯದ ಹೊರತು ಅಹಿಂಸೆಯನ್ನು ಕಲ್ಪಿಸಲು ಸಾಧ್ಯವಿಲ್ಲ.

ಮುಸ್ಲಿಮರು ಅನ್ಯಾಯವೆಸಗಿದ್ದರೆಂಬುದನ್ನು ನಾವು ಒಪ್ಪುತ್ತೇವೆ. ಅವರು ಧರ್ಮದ ಹೆಸರಲ್ಲಿ ನ್ಯಾಯವನ್ನು ತುಳಿದಿದ್ದಾರೆನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಹಿಂದೂಗಳು ಅಹಿಂಸೆಯ ಪ್ರತಿಪಾದಕರಾಗಿದ್ದೂ ಹಿಂಸೆಯ ಧ್ವಜವನ್ನು ನಾಟಿರಲಿಲ್ಲವೇ? ಅಷ್ಟೇ ಏಕೆ? ಬೌದ್ಧ ಮತ್ತು ಜೈನ ಅರಸರು ಅಹಿಂಸೆಯನ್ನು ತಮ್ಮ ಧರ್ಮದ ಮೂಲ ಮಂತ್ರವೆಂದು ನಂಬುತ್ತಲೇ ಧರ್ಮದ ಹೆಸರಲ್ಲಿ ರಕ್ತದ ಹೊಳೆ ಹರಿಸಿರಲಿಲ್ಲವೇ? ಹಾಗಾಗಿ, ಯಾವುದೇ ಧರ್ಮದ ಶ್ರೇಷ್ಠತೆಯನ್ನು ಅದರ ಅನುಯಾಯಿಗಳ ಕರ್ಮಗಳಿಂದ ಅಳೆಯಬಾರದು. ಬದಲಾಗಿ, ಆಯಾ ಧರ್ಮದ ನೇತಾರ ಅಥವಾ ಸಂಸ್ಥಾಪಕರು ಯಾವ ಶಿಕ್ಷಣ ನೀಡಿದ್ದಾರೆಂಬುದನ್ನು ಅವಲೋಕಿಸಬೇಕು.

ಪ್ರವಾದಿ ಮುಹಮ್ಮದ್(ಸ) ಇಸ್ಲಾಮಿನ ಸಂದೇಶ ಪ್ರಚಾರಕರನ್ನು ವಿವಿಧ ದೇಶಗಳಿಗೆ ಪ್ರಚಾರಕಾರ್ಯಕ್ಕಾಗಿ ಕಳುಹಿಸುತ್ತಾ ಹೀಗೆಂದಿದ್ದರು,

"ಯಾರಾದರೂ ನಿಮ್ಮಲ್ಲಿ, ಸ್ವರ್ಗದ ಕೀಲಿಕೈಯೇನೆಂದು ವಿಚಾರಿಸಿದರೆ ಅದು ದೇವಾರಾಧನೆ ಮತ್ತು ಸತ್ಕರ್ಮಗಳಲ್ಲಿದೆಯೆಂದು ಹೇಳಿರಿ."

ಅರಫಾ ಮೈದಾನದಲ್ಲಿ ಪ್ರವಾದಿ ಮುಹಮ್ಮದ್(ಸ) ಅವರ ಬಾಯಿಂದ ಹೊರಟ ಸಾರವತ್ತಾದ ಅಣಿಮುತ್ತುಗಳು ಎಂದೆಂದಿಗೂ ಇಸ್ಲಾಮೀ ಜೀವನದ ಪಾಲಿಗೆ ಅಮೃತ ಸಿಂಚನವಾಗಿ ಪರಿಣಮಿಸುವುದು. ಆ ಸಂದೇಶದ ಸಾರವೇನಾಗಿತ್ತು? ನ್ಯಾಯ! ಅವರ ಒಂದೊಂದು ವಾಕ್ಯದಿಂದಲೂ ನ್ಯಾಯದ ಪ್ರತಿಧ್ವನಿ ಅನುರಣಿಸುತ್ತಿತ್ತು. ಪ್ರವಾದಿ ಮುಹಮ್ಮದ್(ಸ) ಹೇಳಿದರು,

> "ಓ ಸತ್ಯವಿಶ್ವಾಸಿಗಳೇ! ನನ್ನ ಮಾತನ್ನು ಚೆನ್ನಾಗಿ ಆಲಿಸಿರಿ ಮತ್ತು ಗ್ರಹಿಸಿರಿ. ತಿಳಿಯಿರಿ, ಸತ್ಯವಿಶ್ವಾಸ ಸ್ವೀಕರಿಸಿದವರೆಲ್ಲರೂ ಪರಸ್ಪರ ಸೋದರರು. ನೀವು ಒಂದೇ ಜನಾಂಗವಾಗಿದ್ದೀರಿ. ತನ್ನ ಸೋದರನು ಸ್ವ ಇಚ್ಛೆಯಿಂದ ನೀಡಿದ ಹೊರತು ಆತನ ಸಂಪತ್ತು ಇನ್ನೋರ್ವ ಸೋದರನಿಗೆ ಎಂದೆಂದಿಗೂ ಧರ್ಮಸಮ್ಮತವಾಗಲಾರದು. ಅನ್ಯಾಯವನ್ನೆಂದೂ ಮಾಡದಿರಿ. ಎಂದೆಂದಿಗೂ ಅನ್ಯಾಯದಿಂದ ದೂರವೇ ಇರಿ."

ಈ ಅನಂತ ಸಂದೇಶದಲ್ಲಿ ಇಸ್ಲಾಮಿನ ಆತ್ಮ ಅಡಗಿದೆ. ಇಸ್ಲಾಮಿನ ಬುನಾದಿಯು ನ್ಯಾಯದ ಮೇಲೆ ನಿಂತಿದೆ. ಅಲ್ಲಿ ಸಾಮ್ರಾಟ-ಫಕೀರ, ಶ್ರೀಮಂತ-ಬಡವರೆಲ್ಲರಿಗೂ ಕೇವಲ ಒಂದೇ ನ್ಯಾಯವಿದೆ. ಅದರಲ್ಲಿ ಯಾರಿಗೂ ರಿಯಾಯಿತಿಯಿಲ್ಲ, ಯಾರೊಂದಿಗೂ ಪಕ್ಷ ಬೇಧವಿಲ್ಲ. ದುರ್ಬಲರು ದೊಡ್ಡ ದೊಡ್ಡ ಬಲಶಾಲಿ ಅರಸರೆದುರು ಕೇವಲ ನ್ಯಾಯದ ಬಲದಿಂದಲೇ ವಿಜಯಗಳಿಸಿರುವಂತಹ ನೂರಾರು ಉದಾಹರಣೆಗಳಿವೆ. ಅದೇ ರೀತಿ ಸಾಮ್ರಾಟರೂ ಕೂಡ ತಮ್ಮ ಪುತ್ರ, ಪತ್ನಿ ಮಾತ್ರವಲ್ಲ ಸ್ವಯಂ ತಮ್ಮನ್ನೇ ನ್ಯಾಯಕ್ಕಾಗಿ ಅರ್ಪಿಸಿದ ಉದಾಹರಣೆಗಳಿಗೂ ಕೊರತೆಯಿಲ್ಲ.

ಜಗತ್ತಿನ ಅತ್ಯಂತ ಸುಸಂಸ್ಕೃತ ಜನಾಂಗದ ನ್ಯಾಯನೀತಿಯನ್ನು ಇಸ್ಲಾಮೀ ನ್ಯಾಯ ನೀತಿಯೊಂದಿಗೆ ತುಲನೆ ಮಾಡಿ ನೋಡಿರಿ. ನೀವು, ಇಸ್ಲಾಮಿನ ತಟ್ಟೆ ಭಾರವಾಗಿರುವುದನ್ನು ಕಾಣುವಿರಿ. ಪತನೋನ್ಮುಖವಾಗುತ್ತಿರುವ ಅವಸ್ಥೆಯಲ್ಲಿ ಎಲ್ಲ

ಜನಾಂಗಗಳ ಆಡಳಿತ ವರ್ಗದಲ್ಲಿ ಕೆಡುಕು ಕಾಣಿಸಿಕೊಳ್ಳುತ್ತದೆ. ಇದರಲ್ಲಿ ಹಿಂದೂ, ಮುಸ್ಲಿಮ್, ಕ್ರೈಸ್ತರೆಂಬ ಭೇದವಿಲ್ಲ. ಇಂದು ನಾವು ಮುಸ್ಲಿಮರನ್ನು ಪಕ್ಷಪಾತಿಗಳಾಗಿರುವಂತೆ ಕಾಣುತ್ತೇವೆ. ಆದರೆ, ಇಸ್ಲಾಮಿನ ಪತಾಕೆಯು ಕಟಕ್‌ನಿಂದ ಡೇನ್ಯೂಶಷ್‌ವರೆಗೂ ತುರ್ಕಿಸ್ತಾನದಿಂದ ಸ್ಪೈಯಿನ್‌ವರೆಗೂ ಹಾರಾಡುತ್ತಿದ್ದಾಗ, ಮುಸ್ಲಿಮ್ ಅರಸರುಗಳು ತೋರಿದ ಪರಧರ್ಮ ಸಹಿಷ್ಣುತೆಯ ಉದಾಹರಣೆಯು ಇತಿಹಾಸದಲ್ಲೆಂದೂ ಕಾಣಸಿಗದು. ಉನ್ನತ ಸರಕಾರಿ ಹುದ್ದೆಗಳಲ್ಲಿ ಮುಸ್ಲಿಮೇತರರ ನೇಮಕವಂತೂ ಸಾಮಾನ್ಯ ವಿಷಯವಾಗಿತ್ತು. ವಿಶ್ವವಿದ್ಯಾಲಯಗಳ ಚಾನ್ಸಲರ್‌ಗಳೂ ಕ್ರೈಸ್ತ ಮತ್ತು ಯಹೂದಿಗಳಾಗಿರುತ್ತಿದ್ದರು. ಈ ಹುದ್ದೆಗಳಿಗೆ ಕೇವಲ ಸಾಮರ್ಥ್ಯ ಮತ್ತು ಅರ್ಹತೆಯೇ ಮಾನದಂಡವಾಗಿರುತ್ತಿತ್ತು. ಅದರಲ್ಲಿ ಧರ್ಮದೊಂದಿಗೆ ಯಾವುದೇ ಸಂಬಂಧವಿರುತ್ತಿರಲಿಲ್ಲ. ಎಲ್ಲ ಶಿಕ್ಷಣಾಲಯದ ಬಾಗಿಲುಗಳಲ್ಲಿ ಈ ಕೆಳಗಿನ ಮಾತುಗಳನ್ನು ಕೆತ್ತಿರಲಾಗುತ್ತಿತ್ತು,

'ಭೂಮಿಯು ಕೇವಲ ಈ ನಾಲ್ಕು ವಸ್ತುಗಳಿಂದ ಆಧಾರಿತವಾಗಿದೆ: ಬುದ್ಧಿ ಜೀವಿಗಳ ಜ್ಞಾನ, ಸಜ್ಜನರ ದೇವಾರಾಧನೆ, ವೀರರ ಸಾಹಸ ಮತ್ತು ಬಲಶಾಲಿಗಳ ನ್ಯಾಯ ಪಾಲನೆ'.

## ಸಮಾನತೆ

ಈಗ ಸಂಸ್ಕೃತಿಯ ಎರಡನೇ ಭಾಗವನ್ನು ನೋಡೋಣ. ಈ ವಿಷಯದಲ್ಲಿಯೂ ಇಸ್ಲಾಮ್ ನಿಸ್ಸಂದೇಹವಾಗಿಯೂ ಇತರ ಧರ್ಮಗಳನ್ನು ಹಿಂದಿಕ್ಕಿದೆ. ಇಂದು ಕಾರ್ಲ್‌ಮಾರ್ಕ್ಸ್(Carlmarx) ಮತ್ತು ರುಸ್ಸೋ(Rousseau)ರದ್ದೆಂದು ಹೇಳಲಾಗುತ್ತಿರುವ ಸಿದ್ಧಾಂತವು ವಾಸ್ತವದಲ್ಲಿ ಅರೇಬಿಯಾದ ಮರುಭೂಮಿಯಲ್ಲಿ ಅಸ್ತಿತ್ವಕ್ಕೆ ಬಂದಿತ್ತು. ಅದರ ಸಂಸ್ಥಾಪಕರು ಅನಕ್ಷರಸ್ಥರಾಗಿದ್ದ ಪ್ರವಾದಿ ಮುಹಮ್ಮದ್‌ರಾಗಿದ್ದರು. ಅಲ್ಲಾಹನ ಹೊರತು ಇತರ ಯಾರ ಮುಂದೆಯೂ ತಲೆಬಾಗುವುದನ್ನು ಪಾಪವೆಂದು ಸಾರಿದವರಲ್ಲಿ ಪ್ರವಾದಿ ಮುಹಮ್ಮದ್‌ರಲ್ಲದೆ(ಸ) ಬೇರೆ ಯಾರಾದರೂ ಧಾರ್ಮಿಕ ನೇತಾರರಿರುವರೇ? ಮುಹಮ್ಮದರು(ಸ) ರೂಪಿಸಿದ ಸಮಾಜದಲ್ಲಿ ಅರಸನ ಕಲ್ಪನೆಯೇ ಇರಲಿಲ್ಲ. ಆಡಳಿತ ಕಾರ್ಯ ನೋಡಿಕೊಳ್ಳಲು ಕೇವಲ ಓರ್ವ ಖಲೀಫರ ವ್ಯವಸ್ಥೆ ಮಾಡಲಾಗಿತ್ತು. ಅವರನ್ನು ಜನಾಂಗದ ಕೆಲವು

ಮಂದಿ ಗಣ್ಯರು ಚುನಾಯಿಸುತ್ತಿದ್ದರು. ಈ ನಿಯಮದಿಂದ ಪ್ರವಾದಿವರ್ಯರು(ಸ) ಸ್ವಯಂ ತಮ್ಮನ್ನು ಹೊರಗಿಟ್ಟಿರಲಿಲ್ಲ. ಅವರು ತಮ್ಮ ಚಿಕ್ಕಪ್ಪನ ಪುತ್ರ ಮತ್ತು ತಮ್ಮ ಅಳಿಯ ಹ. ಅಲೀಯವರನ್ನು ಖಲೀಫರನ್ನಾಗಿ ಮಾಡಲಿಲ್ಲ. ವಾಸ್ತವದಲ್ಲಿ, ಕೇವಲ ಒಂದು ಸಂಜ್ಞೆಯ ಮೂಲಕ ಅಲೀಯವರನ್ನು(ರ) ಖಲೀಫರನ್ನಾಗಿ ಚುನಾಯಿಸಬಹುದಾದಷ್ಟು ಪ್ರಭಾವವನ್ನು ಪ್ರವಾದಿವರ್ಯರು(ಸ) ಹೊಂದಿದ್ದರು.

ಅದೇ ಪ್ರಕಾರ, ಚುನಾಯಿತ ಖಲೀಫರಿಗೆ ಯಾವುದೇ ಮಾಸಾಶನ, ಸಂಬಳ, ಜಾಗೀರು ಅಥವಾ ರಿಯಾಯಿತಿಯಿರುತ್ತಿರಲಿಲ್ಲ. ಇದು ಕೇವಲ ಗೌರವದ ಹುದ್ದೆಯಾಗಿತ್ತು. ತನ್ನ ಜೀವನಾವಶ್ಯಕತೆಗಳಿಗಾಗಿ ಖಲೀಫರೂ ಇತರರಂತೆ ದುಡಿಮೆ-ಪರಿಶ್ರಮ ಪಡಬೇಕಾಗುತ್ತಿತ್ತು. ದೊಡ್ಡ ದೊಡ್ಡ ಸಾಮ್ರಾಜ್ಯಗಳ ಆಡಳಿತಾಧಿಕಾರಿಗಳಾಗಿದ್ದಂತಹ ವ್ಯಕ್ತಿತ್ವಗಳು, ಅವರ ಮುಂದೆ ದೊಡ್ಡ ದೊಡ್ಡ ಬಾದಶಾಹರುಗಳೂ ತಲೆ ಬಾಗುತ್ತಿದ್ದರು. ಅವರ ಒಂದೇ ಒಂದು ಸನ್ನೆಯಿಂದ ಅರಸುತನಗಳ ಉತ್ಥಾನ-ಪತನವಾಗುತ್ತಿದ್ದುವು. ಅಂತಹ ವ್ಯಕ್ತಿತ್ವಗಳು ಪಾದರಕ್ಷೆಗಳನ್ನು ಹೊಲಿದೋ ಗ್ರಂಥಗಳನ್ನು ಬರೆದೋ ಮಕ್ಕಳಿಗೆ ವಿದ್ಯಾಭ್ಯಾಸ ನೀಡಿಯೋ ತಮ್ಮ ಜೀವನಾವಶ್ಯಕತೆಗಳನ್ನು ಪೂರೈಸುತ್ತಿದ್ದರು. ತಮ್ಮಲ್ಲಿಗೆ ಅತಿಥಿಗಳೇನಾದರೂ ಬಂದಲ್ಲಿ ಕಷ್ಟಪಡುವಂತಾಗುತ್ತಿತ್ತು. ಅತಿಥಿ ಸತ್ಕಾರಕ್ಕಾಗಿ ಸ್ವಯಂ ಹಸಿದಿರಬೇಕಾಗಿ ಬರುತ್ತಿತ್ತು. ಮನೆಯ ಯಾವುದಾದರೂ ವಸ್ತುವನ್ನು ಮಾರುವಂತಹ ಸ್ಥಿತಿಯೂ ಸಂಜಾತವಾಗುತ್ತಿತ್ತು. ಆದರೆ (ಖಜಾನೆಯಿಂದ) ತಮ್ಮ ಪಾಲನ್ನು ಹೆಚ್ಚಿಸುವ ಕುರಿತು ಯೋಚಿಸುವ ಗೋಜಿಗೂ ಹೋಗುತ್ತಿರಲಿಲ್ಲ.

ಇತರ ಜನಾಂಗಗಳ ನಾಯಕತ್ವ ಪರಂಪರೆಯು ಎಸಗಿದಂತಹ ಅಕ್ರಮ, ದೌರ್ಜನ್ಯಗಳಿಂದ ಅವರ ಇತಿಹಾಸಕ್ಕೇ ಮಸಿ ಬಳಿದಂತಾಗಿಬಿಟ್ಟಿದೆ. ಕ್ರೈಸ್ತ ಧರ್ಮದಲ್ಲಿ ಪಾದ್ರಿಗಳ ಹೊರತು ಬೇರಾರಿಗೂ ಇಂಜೀಲ್ ಪಠಿಸುವ ಸ್ವಾತಂತ್ರ್ಯವಿದ್ದಿರಲಿಲ್ಲ. ಹಿಂದೂ ಸಮಾಜವೂ ಶೂದ್ರರ ಕಲ್ಪನೆಯನ್ನು ಹುಟ್ಟುಹಾಕಿ ತನ್ನ ತಲೆಯ ಮೇಲೆ ಕಳಂಕವನ್ನು ಹೊತ್ತುಕೊಂಡಿತು. ಆದರೆ ಇಸ್ಲಾಮಿನ ಮೇಲೆ ಇಂತಹ ಯಾವುದೇ ಚುಕ್ಕೆಯೂ ಬೀಳಲಿಲ್ಲ. ಗುಲಾಮ ಪದ್ಧತಿಯು ಅಂದಿನ ಕಾಲದಲ್ಲಿ ಜಗತ್ತಿನಾದ್ಯಂತ ಚಾಲ್ತಿಯಲ್ಲಿತ್ತು. ಆದರೆ ಇಸ್ಲಾಮ್ ಗುಲಾಮರೊಡನೆ ತೋರಿದ ಸದ್ವರ್ತನೆಯಿಂದಾಗಿ ಆ ಬಗ್ಗೆ ಇಸ್ಲಾಮ್‌ಗೆ ಹೆಮ್ಮೆ ಪಟ್ಟುಕೊಳ್ಳಬಹುದಾಗಿದೆ. ಇಸ್ಲಾಮ್ ಸ್ವೀಕರಿಸುತ್ತಲೇ

ಗುಲಾಮನು ಸ್ವತಂತ್ರನಾಗಿ ಬಿಡುತ್ತಾನೆ. ಎಲ್ಲಿಯವರೆಗೆಂದರೆ, ತನ್ನ ಒಡೆಯನ ಬಳಿಕ ಆತನ ಪಟ್ಟವೇರಿದ ಅಥವಾ ಆತನ ಸ್ಥಾನಗಳಿಸಿದ ಮತ್ತು ಆತನ ಪುತ್ರಿಯನ್ನು ವಿವಾಹವಾದಂತಹ ಅದೆಷ್ಟೋ ನಿದರ್ಶನಗಳಿವೆ. ಹಿಂದುಳಿದ ವರ್ಗದ ಜತೆ ಇಷ್ಟು ಸೌಜನ್ಯ ತೋರಿದ ಬೇರೆ ಸಮಾಜವಿದೆಯೇ?

ಅಬಲೆಯರೊಡನೆ ತೋರಿದ ಇಸ್ಲಾಮಿನ ಸದ್ವರ್ತನೆಯನ್ನು ಅವಲೋಕಿಸಿದರೆ, ಅದರ ಮುಂದೆ ಇತರ ಸಮಾಜಗಳ ವರ್ತನೆ ಅಮಾನವೀಯವಾಗಿ ಕಂಡೀತು. ಇಸ್ಲಾಮ್ ಸ್ತ್ರೀಯರಿಗೆ ವಾರೀಸಿನಲ್ಲಿ ನೀಡಿದಂತಹ ಹಕ್ಕುಗಳನ್ನು ಬೇರೆ ಯಾವ ಸಮಾಜ ನೀಡಿದೆ? ಬುದ್ಧಿ ಮತ್ತು ಸಂಪತ್ತಿನಲ್ಲಿ ವ್ಯತ್ಯಯವು ಹಿಂದೆಯೂ ಇತ್ತು. ಮುಂದೆಯೂ ಇರುವುದು. ಆದರೆ ಇಸ್ಲಾಮ್, ಯಾವುದೇ ವರ್ಗದ ಕಾಲಿಗೆ ಬೇಡಿಯನ್ನು ಹಾಕಿಲ್ಲ. ಅದರಲ್ಲಿ ಪ್ರತಿಯೋರ್ವ ವ್ಯಕ್ತಿಯೂ ತನ್ನ ಯೋಚನಾ ಸಾಮರ್ಥ್ಯದ ಪ್ರಕಾರ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಈ ನಿಟ್ಟಿನಲ್ಲಿ ಯಾವುದೇ ಅಡೆತಡೆಯನ್ನು ಇಸ್ಲಾಮ್ ಇರಿಸಿಲ್ಲ. ನಮ್ಮ ದೃಷ್ಟಿಯಲ್ಲಿ, ವ್ಯಕ್ತಿಗೆ ಅಭಿವೃದ್ಧಿ ಹೊಂದಲು ಅತ್ಯಧಿಕ ಅವಕಾಶಗಳನ್ನು ಒದಗಿಸಿಕೊಡುವಂತಹ ಸಮಾಜವೇ ಅತ್ಯುತ್ಕೃಷ್ಟವಾಗಿದೆಯೆಂದು ವಾದಿಸಲು ಸಾಧ್ಯ. ಈ ನಿಟ್ಟಿನಲ್ಲಿಯೂ ಇಸ್ಲಾಮಿೂ ಸಂಸ್ಕೃತಿಯನ್ನು ಯಾರೂ ಅಪೂರ್ಣವೆನ್ನಲಾರರು.

## ಸಹೋದರತೆ

ಇನ್ನು ಸಂಸ್ಕೃತಿಯ ಮೂರನೇ ಭಾಗವನ್ನು ನೋಡೋಣ. ಈ ವಿಷಯದಲ್ಲಿಯೂ ಇಸ್ಲಾಮ್ ಇತರ ಜನಾಂಗಗಳಿಗಿಂತ ಹಿಂದೆ ಬಿದ್ದಿಲ್ಲ. ಪ್ರವಾದಿ ಮುಹಮ್ಮದ್(ಸ) ಹೀಗೆಂದಿರುವರು:

"ನಿಮ್ಮಲ್ಲಿ ಒಬ್ಬನು ತನ್ನ ಸ್ವಂತಕ್ಕಾಗಿ ಬಯಸುವುದನ್ನೇ ತನ್ನ ಸಹೋದರನಿಗೂ ಬಯಸದವರೆಗೆ ಸತ್ಯವಿಶ್ವಾಸಿಯಾಗಲಾರನು."

ಇನ್ನೊಂದೆಡೆ ಪ್ರವಾದಿವರ್ಯರು(ಸ) ಹೇಳಿದರು,

"ಯಾರು ಇತರರಿಗೆ ಒಳಿತನ್ನು ಮಾಡುವುದಿಲ್ಲವೋ, ಅವನಿಂದ ದೇವನು ಸಂತುಷ್ಟನಾಗಲಾರನು."

ಪ್ರವಾದಿವರ್ಯರ(ಸ) ಈ ಮಾತು ಸ್ವರ್ಣಾಕ್ಷರಗಳಲ್ಲಿ ಬರೆದಿಡಲರ್ಹವಾಗಿದೆ,

"ದೇವನ ಸಕಲ ಸೃಷ್ಟಿಗಳೂ ಅವನ ಕುಟುಂಬವಾಗಿದೆ ಮತ್ತು ಯಾರು ತನ್ನ ಸಹಸೃಷ್ಟಿಗಳೊಡನೆ ಉತ್ತಮವಾಗಿ ವ್ಯವಹರಿಸುತ್ತಾನೋ ಆತನೇ ದೇವನ ಬಳಿ ಅತ್ಯುತ್ತಮನಾಗಿರುವನು."

ಓರ್ವ ಸತ್ಯವಿಶ್ವಾಸಿಯು ಪ್ರವಾದಿವರ್ಯರಲ್ಲಿ(ಸ) ಕೇಳಿದರು,

"ದೇವನನ್ನು ಯಾವ ರೀತಿಯಲ್ಲಿ ಆರಾಧಿಸಬೇಕು?"

ಪ್ರವಾದಿವರ್ಯರು(ಸ) ಹೇಳಿದರು,

"ದೇವನ ಆರಾಧನೆಯನ್ನು ಮಾಡಲಿಚ್ಛಿಸುತ್ತೀರಾದರೆ ಮೊತ್ತ ಮೊದಲಾಗಿ ದೇವನ ಸೃಷ್ಟಿಗಳನ್ನು ಪ್ರೀತಿಸಿರಿ."

ಈ ಶಿಕ್ಷಣದಿಂದ ಸ್ಪಷ್ಟವಾಗಿ ತಿಳಿದು ಬರುವುದೇನೆಂದರೆ, ಇಸ್ಲಾಮಿನ ಕಾನೂನು ನಿರ್ಮಾತೃ ಆದ ಪ್ರವಾದಿ ಮುಹಮ್ಮದ್‌ರು(ಸ) ಸಹೋದರತೆಯ ಮಹತ್ವವನ್ನು ಇತರ ಜನಾಂಗಗಳಿಗಿಂತ ಚೆನ್ನಾಗಿಯೇ ಗ್ರಹಿಸಿದ್ದರು.

## ಇಸ್ಲಾಮಿನ ಇತರ ವಿಶೇಷತೆಗಳು

ಇವಿಷ್ಟು ಸಂಸ್ಕೃತಿಯ ಮೂಲ ವಿಷಯಗಳಾಗಿವೆ. ಇದರ ದ್ವಿತೀಯ ಭಾಗದಲ್ಲಿ ರಾಜಕೀಯ ಸಂಪ್ರದಾಯ, ವಿದ್ಯಾಪ್ರಿಯತೆ, ಸ್ವಾತಂತ್ರ್ಯ ಪ್ರಿಯತೆ, ಕಲೆಗಾರಿಕೆ ನಿರ್ಮಾಣ ಕಲೆ, ವೇಷಭೂಷಣ ಇತ್ಯಾದಿಗಳೂ ಇವೆ.

ಬಡ್ಡಿ ವ್ಯವಸ್ಥೆಯು ಜಗತ್ತಿನಲ್ಲಿ ಎಷ್ಟೆಲ್ಲ ಕ್ಷೋಭೆ ಹರಡಿದೆ ಮತ್ತು ಇನ್ನೆಷ್ಟು ಹರಡುತ್ತಲಿದೆಯೆಂಬುದು ಯಾರಿಂದಲೂ ಮರೆಯಾಗಿಲ್ಲ. ಇಸ್ಲಾಮ್ ಬಡ್ಡಿಯನ್ನು ನಿಷಿದ್ಧವೆಂದು ಸಾರಿದ ಏಕೈಕ ಧರ್ಮವಾಗಿದೆ. ವ್ಯಾಪಾರೀ ದೃಷ್ಟಿಕೋನದಿಂದ ಈ ನಿಷೇಧವನ್ನು ವಿರೋಧಿಸಲಾಗುತ್ತಿರುವುದು ಬೇರೆ ವಿಚಾರ. ಆದರೆ ಸಾಮಾಜಿಕವಾಗಿ ಇಸ್ಲಾಮ್ ಬಡ್ಡಿಯನ್ನು ನಿಷೇಧಿಸಿರುವುದನ್ನು ಯಾರೂ ಬೆಂಬಲಿಸದಿರಲಾರರು.

ವಿದ್ಯಾಪ್ರಿಯತೆಯ ವಿಷಯವಾಗಿ, ಬಹುಶಃ ಕೇವಲ ಕೆಲವೇ ಜನಾಂಗಗಳು ಮುಸ್ಲಿಮರಿಗೆ ಸಾಟಿಯಾಗಬಲ್ಲವೆಂದು ವಾದಿಸಬಹುದು. ಭಾರತದಿಂದ ವೈದ್ಯ ಶಾಸ್ತ್ರ ಗಣಿತ ಶಾಸ್ತ್ರ, ಖಗೋಳ ಶಾಸ್ತ್ರ, ಆಧ್ಯಾತ್ಮ; ಗ್ರೀಸ್‌ನಿಂದ ತತ್ವ ಶಾಸ್ತ್ರ ಮತ್ತು ಪ್ರಜಾಡಳಿತ; ಎಲ್ಲಿ ಯಾವ ರತ್ನ ದೊರೆಯಿತೋ ಇಸ್ಲಾಮ್ ಅದನ್ನೆಲ್ಲಾ ತನ್ನೆರಡು

ಬಾಹುಗಳಿಂದ ಬಾಚಿ ತನ್ನದಾಗಿಸಿತು ಮತ್ತು ತನ್ನ ಸಂಸ್ಕೃತಿಯ ಅಂಗವನ್ನಾಗಿ ಮಾಡಿಕೊಂಡಿತು.

ನಿರ್ಮಾಣ ಕಲೆಯಲ್ಲಿ ಬಹುಶಃ ಜಗತ್ತಿನ ಯಾವುದೇ ಸಮುದಾಯವೂ ಮುಸ್ಲಿಮರನ್ನು ಮೀರಿಸಲಾರದು. ಎಲ್ಲೆಲ್ಲಾ ಇಸ್ಲಾಮಿೂ ಸಂಸ್ಕೃತಿಯ ಧ್ವಜ ಹಾರಾಡಿದೆಯೋ, ಅಲ್ಲೆಲ್ಲಾ ಮುಸ್ಲಿಮರು ನಿರ್ಮಿಸಿದ ಕಟ್ಟಡಗಳು ಇಂದೂ ಪ್ರಶಂಸೆ ಗಿಟ್ಟಿಸುತ್ತಿವೆ. ಹಾಗೆಯೇ, ಸ್ವಾತಂತ್ರ್ಯದ ಮೇಲಿನ ಪ್ರೀತಿಯೂ ಸಾಟಿಯಿಲ್ಲದಂಥದ್ದು. ಕೇವಲ ಬೆರಳೆಣಿಕೆಯಷ್ಟಿರುವ ಸ್ವಾತಂತ್ರ್ಯ ಪ್ರಿಯರನ್ನು ಯುರೋಪಿನ ಎರಡು ಬೃಹತ್ ಶಕ್ತಿಗಳೆದುರು ಸಂಘರ್ಷ ನಿರತವಾಗಿರುವುದನ್ನು ಕಂಡು ಹೆಮ್ಮೆ ಪಟ್ಟುಕೊಳ್ಳದ ಸನ್ಮನಸ್ಸಿನ ವ್ಯಕ್ತಿ ಯಾರಿರಬಹುದು? ಡಮಾಸ್ಕಸ್, ಸಿರಿಯಾ, ಟರ್ಕಿ, ಈಜಿಪ್ಟ್ - ಎಲ್ಲಿ ನೋಡಿದರೂ ಮುಸ್ಲಿಮರು ಸ್ವಾತಂತ್ರ್ಯದ ಹಾದಿಯಲ್ಲಿ ಸ್ವಯಂ ತಮ್ಮನ್ನು ಅರ್ಪಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಅಫಘಾನಿಸ್ತಾನವು ಕೇವಲ ಸ್ವಾತಂತ್ರ್ಯಕ್ಕಾಗಿ ತನ್ನನ್ನು ಅರ್ಪಿಸಿಕೊಂಡುದರಿಂದಾಗಿಯೇ ಇಂದು ಅದು ಸ್ವತಂತ್ರ ರಾಷ್ಟ್ರವಾಗುಳಿದಿದೆ. ಜನರ ಪಾಲಿಗೆ ಇಸ್ಲಾಮಿನಲ್ಲಿ ಇರುವಷ್ಟು ಚುಂಬಕ ಶಕ್ತಿಯು ಇತರ ಯಾವುದೇ ಜನಾಂಗದಲ್ಲಿಲ್ಲವೆನ್ನಲೂ ನಾನು ಸಿದ್ಧನಿದ್ದೇನೆ. ನಮಾಝ್ ನಿರ್ವಹಿಸುತ್ತಿರುವ ವೇಳೆ ಓರ್ವ ಜಾಡಮಾಲಿಯೂ ತನ್ನನ್ನು ನಗರದ ದೊಡ್ಡ ಶ್ರೀಮಂತನೊಡನೆ ಒಂದೇ ಪಂಕ್ತಿಯಲ್ಲಿ ಕಾಣುತ್ತಾನೆ. ಹೀಗಿರುತ್ತಾ ಅವನ ಮನದಲ್ಲಿ ಹೆಮ್ಮೆಯ ತರಂಗವೇಳದಿದ್ದೀತೆ? ತದ್ವಿರುದ್ಧವಾಗಿ ಹಿಂದೂ ಸಮಾಜದಲ್ಲಿ ಯಾರನ್ನು ಕೀಳಾಗಿ ಪರಿಗಣಿಸಲಾಗಿದೆಯೋ ಅವರನ್ನು ಬಾವಿಯ ಕಟ್ಟೆ ಯನ್ನೇರಲೂ ಬಿಡಲಾಗುತ್ತಿಲ್ಲ. ಅವರನ್ನು ಮಂದಿರ ಪ್ರವೇಶದಿಂದಲೂ ತಡೆಯಲಾಗುತ್ತದೆ. ಇದು ತಮ್ಮೊಂದಿಗೆ ಜೋಡಿಸುವುದಲ್ಲ, ತಮ್ಮಿಂದ ಬೇರ್ಪಡಿಸುವುದರ ಲಕ್ಷಣವಾಗಿದೆ.

ಇಸ್ಲಾಮ್ ಧರ್ಮ ಮತ್ತು ಸಂಸ್ಕೃತಿಗೆ ಲೋಕದಲ್ಲಿ ದೊರೆತ ಯಶಸ್ಸು ವಾಸ್ತವದಲ್ಲಿ ಖಡ್ಗದ ಬಲದಿಂದಲ್ಲ, ಬದಲಾಗಿ ಇದೇ ಸಹೋದರತೆಯ ಕಾರಣವಾಗಿ ದೊರೆತಿದೆ. ಇಂದೂ ಕೂಡಾ ಆಫ್ರಿಕಾದಲ್ಲಿ ಕ್ರೈಸ್ತರಿಗಿಂತ ಇಸ್ಲಾಮಿಗೆ ಹೆಚ್ಚು ಪ್ರಚಾರ ದೊರೆಯುತ್ತಿದೆ. ವಸ್ತುತಃ ಕ್ರೈಸ್ತರ ಬಳಿ ಸರ್ವರೀತಿಯ ಪ್ರೇರಕ ಶಕ್ತಿಗಳಿವೆ ಆದರೆ ಇಲ್ಲಿಯಾದರೋ ಕೇವಲ ಅಲ್ಲಾಹನ ಹೆಸರು ಮಾತ್ರವಿದೆ.

ಕೊನೆಯಲ್ಲಿ, ನಾವು ಸಂಘಟನೆಯ ಮಿತ್ರರು ಮತ್ತು ಸಂಘಟನೆಯೊಡನೆ ನಿವೇದಿಸಿ ಕೊಳ್ಳುತ್ತಿರುವುದೇನೆಂದರೆ, ನಿಮ್ಮ ಈ ಕಾರ್ಯ ಚಟುವಟಿಕೆಗಳ ಮೂಲಕ ನೀವು ನಮ್ಮೆರಡೂ ಜನಾಂಗಗಳ ಮಧ್ಯೆ ಉಕ್ಕಿನ ಗೋಡೆಯನ್ನೇರಿಸುತ್ತಿರುವಿರಿ. ಒಂದು ವೇಳೆ, ನೀವು ಮುಸ್ಲಿಮರಲ್ಲಿ ಬಿಕ್ಕಟ್ಟನ್ನುಂಟು ಮಾಡದೆಯೇ ನಿಮ್ಮ ಜನಾಂಗದಲ್ಲಿ ಒಗ್ಗಟ್ಟನ್ನು ಮೂಡಿಸಬಲ್ಲಿರಾದರೆ ಅನಾಥರು, ವಿಧವೆಯರು ಮತ್ತು ಅಸ್ಪೃಶ್ಯರ ಒಳಿತು ಹಾಗೂ ಏಳಿಗೆಯನ್ನು ಬಯಸುತ್ತೀರಾದರೆ ಅವಶ್ಯವಾಗಿ ಮಾಡಿರಿ. ಹಿಂದೂಗಳಲ್ಲೂ ಬಿಕ್ಕಟ್ಟನ್ನುಂಟು ಮಾಡದೆ ಕಾರ್ಯ ನಿರ್ವಹಿಸುವುದಾದರೆ ಸಂಘಟನೆಯಿಂದಲೂ ಯಾವುದೇ ದೋಷವಿಲ್ಲ. ಆದರೆ ಇಂದಿನವರೆಗಿನ ನಮ್ಮ ಅನುಭವದಿಂದ ತಿಳಿದು ಬಂದಂತೆ, ಆಂತರಿಕ ಒಗ್ಗಟ್ಟು ಮತ್ತು ಆಂತರಿಕ ಸಂಘಟನೆಯು ಕೇವಲ ಕಲ್ಪನೆಯ ಕೂಸಾಗಿದೆ. ಆಂತರಿಕ ಒಗ್ಗಟ್ಟನ್ನಂತೂ ಸಾಧಿಸಲಾಗದು. ಏಕೆಂದರೆ ಅದನ್ನು ವಿಶ್ವಾಸ, ಪ್ರೀತಿ ಮತ್ತು ಸಹೋದರತೆಯ ಭಾವನೆಯೊಂದಿಗೆ ಮಾಡಲಾಗುತ್ತಿಲ್ಲ. ಒಳಗೆ ಇರುವಂತಹ ಅದೆಷ್ಟೋ ಕೆಡುಕುಗಳು ಹಾಗೆಯೇ ಇದ್ದು ಬಿಟ್ಟಿವೆ. ಅದರಲ್ಲಿ ಯಾವುದೇ ರೀತಿಯ ಸುಧಾರಣೆಯನ್ನು ಮಾಡಲಾಗಿಲ್ಲ. ಎರಡೂ ಜನಾಂಗಗಳ ಮಧ್ಯೆ ದಿನೇದಿನೇ ಹಗೆತನ ಬೆಳೆಯುತ್ತಲಿದೆ. ಕನಿಷ್ಠ ಒಂದು ವಿಷಯವಂತೂ ಸ್ಪಷ್ಟವಾಗಿದೆ. ಅದೆಂದರೆ, ಯಾವ ಗತಿಯಲ್ಲಿ ಹಿಂದೂ ಮುಸ್ಲಿಮರ ಮಧ್ಯೆ ಭಿನ್ನಾಭಿಪ್ರಾಯ ಬೆಳೆಯುತ್ತಿದೆಯೋ ಆ ಗತಿಯಲ್ಲಿ ಹಿಂದೂಗಳಲ್ಲಿ ಆಂತರಿಕ ಒಗ್ಗಟ್ಟು ಸಾಧಿಸಲಾಗುತ್ತಿಲ್ಲ. ನಮಗಂತೂ ಇದರಲ್ಲಿ ದಿನನಿತ್ಯ ಜಡತ್ವ ಮತ್ತು ಅದರಲ್ಲಿ ಚುರುಕುತನದ ಪ್ರಭಾವ ಕಾಣುತ್ತಿದೆ. ಪರಿಣಾಮವಾಗಿ, ನಾವು ಒಗ್ಗಟ್ಟಾಗಲಾರೆವು, ಸ್ವಾತಂತ್ರ್ಯದ ಹಾದಿಯನ್ನು ಕ್ರಮಿಸಲಾರೆವು ಮತ್ತು ನಮ್ಮ ಸ್ಥಿತಿಯು ನಿರಂತರ ನಿಂದ್ಯತೆಯೆಡೆಗೆ ಸಾಗುವುದು.